ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 20 ನೇ ಮಾರ್ಚ್, 2020

ಬೆಂಗಳೂರು ನಗರದಲ್ಲಿ ಎಲೆಕ್ಟ್ರಾನಿಕ್ ಬಸ್ಸುಗಳ ಸಂಚಾರದ ಕುರಿತು

ಶ್ರೀ ಕೆ. ಎ. ತಿಪ್ಪೇಸ್ವಾಮಿ(ನಾಮನಿರ್ದೇಶನ ಹೊಂದಿದವರು):-

1379 (1623) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಬೆಂಗಳೂರು ನಗರದಲ್ಲಿ ಹೆಚ್ಚುತ್ತಿರುವ ಮಾಲಿನ್ಯ ತಡೆಗಟ್ಟುವ ಸಲುವಾಗಿ ಎಲೆಕ್ಟ್ರಾನಿಕ್ ಬಸ್‌ಗಳನ್ನು ರಸ್ತೆಗಿಳಿಸಲು ಸರ್ಕಾರ ನಿರ್ಧಾರ ಕೈಗೊಂಡಿದೆಯೇ ; ಈ ಬಗ್ಗೆ ತೆಗೆದುಕೊಂಡ ಕ್ರಮಗಳೇನು ;

(ಆ) ಕೇಂದ್ರ ಸರ್ಕಾರದ ಭಾರಿ ಕೈಗಾರಿಕಾ ಸಚಿವಾಲಯವು 2ನೇ ಹಂತದ ಫೇಮ್ ಇಂಡಿಯಾ ಯೋಜನೆಯಡಿ ಎಷ್ಟು ಎಲೆಕ್ಟ್ರಾನಿಕ್ ಬಸ್‌ಗಳನ್ನು (ನಾಲ್ಕು ಸಾರಿಗೆ ನಿಯಮಗಳು ಸೇರಿದಂತೆ) ನೀಡಲು ನಿರ್ಧರಿಸಿದೆ ;

(ಇ) ಪ್ರತಿ ಬಸ್ಸಿಗೆ ಭಾರತ ಸರ್ಕಾರ ನೀಡುವ ಸಹಾಯ ಧನ ಮೊತ್ತವೆಷ್ಟು; (ವಿವರ ನೀಡುವುದು)

(ಈ) ಸಹಾಯ ಧನವನ್ನು ನಿಗಧಿತ ಅವಧಿಯೊಳಗೆ ರಾಜ್ಯ ಸರ್ಕಾರ ಬಳಸಿಕೊಳ್ಳದೆ ಇರುವುದರಿಂದ ಈ ಸಹಾಯ ಧನ ರದ್ದಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಉ) ಬಂದಿದ್ದಲ್ಲಿ, ಈ ಬಗ್ಗೆ ವಿಳಂಬ ಧೋರಣೆ ತೋರಿದ ಅಧಿಕಾರಿಗಳ ಬಗ್ಗೆ ಸರ್ಕಾರ ಇದುವರೆಗೆ ತೆಗೆದುಕೊಂಡ ಕ್ರಮವೇನು ; (ವಿವರ ನೀಡುವುದು)

(ಊ) ಈ ಎಲೆಕ್ಟ್ರಾನಿಕ್ ಬಸ್‌ಗಳನ್ನು ಮತ್ತೆ ಖರೀದಿಸುವ ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಂಡಿರುತ್ತದೆ ? (ವಿವರ ನೀಡುವುದು)